# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **26**
**ಸದಸ್ಯರ ಹೆಸರು** : ಶ್ರೀ ಎಸ್.ರುದ್ರೇಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : 13.09.2021
**ಉತ್ತರಿಸುವ ಸಚಿವರು** : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಉತ್ಪಾದಿಸುತ್ತಿರುವ ವಿದ್ಯುಚ್ಚಕ್ತಿ ಪ್ರಮಾಣ ಎಷ್ಟು ಮತ್ತು ಬೇಡಿಕೆ ಎಷ್ಟು? | ರಾಜ್ಯದಲ್ಲಿ ವಿದ್ಯುತ್ ಉತ್ಪಾದನಾ ಸಾಮರ್ಥ್ಯ ಹೆಚ್ಚಾಗಿದ್ದರೂ, ಬೇಡಿಕೆಗೆ ಸೀಮಿತವಾಗಿ ವಿದ್ಯುತ್ ಉತ್ಪಾದನೆಯನ್ನು ಮಾಡಲಾಗುತ್ತಿದೆ. ಪ್ರಸ್ತುತ, ಸೆಪ್ಟೆಂಬರ್-2021 ರ ಮಾಹೆಯಲ್ಲಿ ದಿನವಹಿ ಸರಾಸರಿ 175 ದಶಲಕ್ಷ ಯೂನಿಟ್ ಗಳಷ್ಟು ವಿದ್ಯುತ್ತನ್ನು ಉತ್ಪಾದಿಸಲಾಗಿರುತ್ತದೆ. |
| ಆ) | ಯಾವ ಮೂಲದಿಂದ ಎಷ್ಟು ವಿದ್ಯುಚ್ಚಕ್ತಿ ಉತ್ಪಾದಿಸಲಾಗುತ್ತಿದೆ. | ರಾಜ್ಯದಲ್ಲಿ 2021-22ನೇ ಸಾಲಿನಲ್ಲಿ ಏಪ್ರಿಲ್-2021ರಿಂದ ಆಗಸ್ಟ್-2021ರ ಅಂತ್ಯದವರೆಗೆ ವಿವಿಧ ಮೂಲಗಳಿಂದ ಲಭ್ಯವಾದ ವಿದ್ಯುತ್ತಿನ ಪ್ರಮಾಣದವಿವರಗಳು ಕೆಳಕಂಡಂತಿವೆ:- (ಕೆಳಗಿನ ಕೋಷ್ಟಕ ನೋಡಿ) |
| ಇ) | ವಿದ್ಯುಚ್ಚಕ್ತಿ ವಿತರಣೆಯಲ್ಲಿ ಆಗುತ್ತಿರುವ ಸೋರಿಕೆ ಪ್ರಮಾಣ ಎಷ್ಟು; | 2020-21ನೇ ಸಾಲಿನಲ್ಲಿ ವಿದ್ಯುತ್ ಸರಬರಾಜು ಕಂಪನಿಗಳ ವಿತರಣಾ ನಷ್ಟದ ಶೇಕಡವಾರು ವಿವರಗಳು ಕೆಳಕಂಡಂತಿವೆ:- (ಕೆಳಗಿನ ಕೋಷ್ಟಕ ನೋಡಿ) |

| **ವಿದ್ಯುತ್ತಿನ ಮೂಲ** | **2021-22ನೇ ಸಾಲಿನಲ್ಲಿ ಏಪ್ರಿಲ್-2021 ರಿಂದ ಆಗಸ್ಟ್-2021ರ ಅಂತ್ಯದವರೆಗೆ ಲಭ್ಯವಾದ ವಿದ್ಯುತ್ತಿನ ಪ್ರಮಾಣ (ದ.ಲ.ಯೂ.) (ತಾತ್ಕಾಲಿಕ)** |
|---|---|
| ಜಲವಿದ್ಯುತ್ | 5494.873 |
| ಶಾಖೋತ್ಪನ್ನ | 6318.875 |
| ಕೇಂದ್ರ ಸರ್ಕಾರ ಸ್ವಾಮ್ಯದ ವಿದ್ಯುತ್ ಉತ್ಪಾದನಾ ಘಟಕಗಳಿಂದ ರಾಜ್ಯದ ಪಾಲು | 5017.646 |
| ಅಸಂಪ್ರದಾಯಿಕ ಮೂಲಗಳಿಂದ (ಸೌರವಿದ್ಯುತ್) | 11728.930 |
| ಬೃಹತ್ಐ.ಪಿ.ಪಿ. | 1184.636 |
| ಜಿಂದಾಲ್ | 223.706 |
| **ಒಟ್ಟು** | **29968.66** |

| **ವಿದ್ಯುತ್ ಸರಬರಾಜು ಕಂಪನಿ** | **2020-21ನೇ ಸಾಲಿನಲ್ಲಿ ಶೇಕಡವಾರು ವಿತರಣಾ ನಷ್ಟ (Provisional)** |
|---|---|
| ಬೆಸ್ಕಾಂ | 11.06 |
| ಮೆಸ್ಕಾಂ | 9.86 |
| ಸೆಸ್ಕ್ | 12.75 |
| ಹೆಸ್ಕಾಂ | 13.25 |
| ಜೆಸ್ಕಾಂ | 11.73 |

| | | |
|---|---|---|
| ಈ) | ಸೌರಶಕ್ತಿ ವಿದ್ಯುತ್ ಉತ್ಪಾದನೆಗೆ ಸರ್ಕಾರದ ಚಿಂತನೆಗಳೇನು | ಸೌರಶಕ್ತಿ 2014-21 ರಡಿ ನಿಗದಿಪಡಿಸಿದ ಶೇ.8 ರಷ್ಟು ಸೌರ ನವೀಕರಿಸಬಹುದಾದ ಇಂಧನ ಖರೀದಿ ಬಾಧ್ಯತೆ (Solar Renewable Energy Purchase Obligation-ಆರ್.ಪಿ.ಓ) ಗುರಿಯನ್ನು ನಿಗದಿತ ಅವಧಿಯೊಳಗಡೆ ತಲುಪಲಾಗಿದೆ. ಈವರೆಗೆ 7144.66 ಮೆಗಾವ್ಯಾಟ್ ನಷ್ಟು ಸಾಮರ್ಥ್ಯದ ಸೌರ ಘಟಕಗಳು ಅನುಷ್ಠಾನಗೊಂಡಿರುತ್ತದೆ.<br>ಇನ್ನಿತರ ಉದ್ದೇಶಿತ ಯೋಜನೆಗಳ ವಿವರಗಳು ಈ ಕೆಳಗಿನಂತಿರುತ್ತದೆ.<br>• ಕೇಂದ್ರ ಸರ್ಕಾರದ ಎಮ್.ಎನ್.ಆರ್.ಇ ಯ Prime Minister-Kisan Urja Suraksha Evam Utthan Mahabiyan-(PM-KUSUM) Component-C ಯೋಜನೆಯಡಿ ಒಟ್ಟು 2,50,000 ಕೃಷಿ ಪಂಪ್‌ಸೆಟ್‌ಗಳ ಫೀಡರ್‌ಗಳಿಗೆ ಸೋಲಾರ್ ಘಟಕಗಳನ್ನು ಅಳವಡಿಸುವ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>• ಕಲ್ಬುರ್ಗಿಯಲ್ಲಿ 500 ಮೆ.ವ್ಯಾ ಸಾಮರ್ಥ್ಯದ ಸೋಲಾರ್ ಪಾರ್ಕ್‌ನ್ನು ನಿರ್ಮಿಸುವ ಯೋಜನೆಯನ್ನು ರೂಪಿಸಲಾಗಿದೆ. ರಾಜ್ಯದಲ್ಲಿ ಕ್ರೆಡಲ್ ವತಿಯಿಂದ ಪ್ರಾಯೋಗಿಕವಾಗಿ ಬ್ಯಾಟರಿ ಶೇಖರಣಾ ವ್ಯವಸ್ಥೆಯನ್ನು ಹೊಂದಿದ ಘಟಕವನ್ನು ಮತ್ತು ತೇಲುವ ಸೋಲಾರ್ ಘಟಕವನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>• ಕೊಪ್ಪಳ, ಗದಗ ಮತ್ತು ಬೀದರ್ ಜಿಲ್ಲೆಗಳಲ್ಲಿ ತಲಾ 600 ಮೆ.ವ್ಯಾಟ್ ಸಾಮರ್ಥ್ಯದ Ultra Mega Renewable Energy Power Project (UMREPP) ಯೋಜನೆಗಳನ್ನು SECI ಸಹಯೋಗದೊಂದಿಗೆ KSPDCL ಸಂಸ್ಥೆಯಿಂದ ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಉ) | ಪ್ರತಿ ಎರಡು ವರ್ಷಕ್ಕೊಮ್ಮೆ ವಿದ್ಯುತ್ ದರ ಏರಿಸುತ್ತಿರಲು ಕಾರಣವೇನು; ದರ ನಿಯಂತ್ರಣಕ್ಕೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ವಿದ್ಯುತ್ ದರವನ್ನು ಹೆಚ್ಚಿಸಲು ಕಾರಣವಾಗುವ ಪ್ರಮುಖ ಅಂಶಗಳು ಈ ಕೆಳಕಂಡಂತಿವೆ:<br>1) ವಿದ್ಯುತ್ ಬೇಡಿಕೆಯನ್ನು ಪೂರೈಸಲು ಹೊಸ ಉಷ್ಣ ಕೇಂದ್ರ ಹಾಗೂ ನವೀಕರಿಸಬಹುದಾದ ಇಂಧನ ಮೂಲಗಳಿಂದ ವಿದ್ಯುತ್ತನ್ನು ಖರೀದಿಸ ಬೇಕಾಗಿರುವುದರಿಂದ ವಿದ್ಯುತ್ ಖರೀದಿಯ ವೆಚ್ಚವು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದೆ. ಆದುದರಿಂದ ಜಕಾತಿ ಹೆಚ್ಚಳವು ಅನಿವಾರ್ಯವಾಗಿದೆ.<br>2) ದೀರ್ಘಕಾಲದ ವಿದ್ಯುತ್ ಖರೀದಿ ಒಪ್ಪಂದಗಳಿಂದಾಗಿ ವಿದ್ಯುತ್ ಸರಬರಾಜು ಕಂಪನಿಗಳು ಉಷ್ಣ ಕೇಂದ್ರಗಳಿಗೆ ಪ್ರತಿ ತಿಂಗಳು ನಿಗದಿತ ವೆಚ್ಚವನ್ನು ಭರಿಸಬೇಕಾಗುತ್ತದೆ.<br>3) ಇದಲ್ಲದೆ, ನೌಕರರ ಸಂಬಳದ ಪರಿಷ್ಕರಣೆ, ಕಾರ್ಯ ಮತ್ತು ನಿರ್ವಹಣಾ ವೆಚ್ಚ, ಬಂಡವಾಳ ವೆಚ್ಚ ಮತ್ತು ಕಾರ್ಯನಿರತ ಬಂಡವಾಳಕ್ಕಾಗಿ ಸಾಲಗಳ ಮೇಲಿನ ಬಡ್ಡಿ ವೆಚ್ಚಗಳು ಜಕಾತಿ ಪರಿಷ್ಕರಣೆಯಲ್ಲಿ ಒಳಗೊಂಡಿರುತ್ತದೆ.<br>4) ವಿದ್ಯುತ್ ಖರೀದಿ ವೆಚ್ಚ ಮತ್ತು ವಿದ್ಯುತ್ ಮಾರಾಟದಿಂದ ಬರುತ್ತಿರುವ ವ್ಯತ್ಯಾಸವು ಹೆಚ್ಚಾಗುತ್ತಿದ್ದು, ವಿದ್ಯುತ್ ದರ ಏರಿಕೆಯು ಅನಿವಾರ್ಯವಾಗಿರುತ್ತದೆ.<br>ದರ ನಿಗದಿಪಡಿಸುವ ಅಧಿಕಾರವು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ವ್ಯಾಪ್ತಿಗೆ ಒಳಪಟ್ಟಿರುತ್ತದೆ. |

ಸಂಖ್ಯೆ: ಎನರ್ಜಿ 202 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು